# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

5ನೇ ವರ್ಷ 25ನೇ ಸಂಚಿಕೆ ಕೊಪ್ಪ 8-3-1987 ಭಾನುವಾರ ಬೆಲೆ 50 ಪೈಸೆ




## ಮಂಡಲಗಳಿಗೆ ನಾಮಕರಣ ಅಸಮರ್ಥನೀಯ

ಮಂಡಲ ಪಂಚಾಯ್ತಿಗಳಿಗೆ "ಹಿಂದುಳಿದ ಜಾತಿಗಳಿಂದ" ಸದಸ್ಯರನ್ನು ನಾಮಕರಣ ಮಾಡುವ ಸರ್ಕಾರದ ಯೋಚನೆ ಇನ್ನೂ ತೀವ್ರವಾದ ಚರ್ಚೆಗೊಳಗಾಗಿಯೇ ಇದೆ. ಏಕೆಂದರೆ, ರಾಜ್ಯದ ಬಹುತೇಕ ಎಲ್ಲಾ ಪತ್ರಿಕೆಗಳೂ, ಎಲ್ಲಾ ಸಾರ್ವಜನಿಕ ಮತ್ತು ವಿಚಾರವಂತ ವೇದಿಕೆಗಳೂ ಈ ಕ್ರಮವನ್ನು ವಿರೋಧಿಸಿದ್ದರೂ ಕೂಡ ಸರ್ಕಾರ ಅದನ್ನು ಕೈಬಿಡಲೊಪ್ಪದೆ ಯಾವುದಾದರೊಂದು 'ಹಿಂಬಾಗಿಲ' ಮೂಲಕ ಅದನ್ನು ಆಗುಮಾಡಲು ಇನ್ನೂ ಮಾರ್ಗೋಪಾಯಗಳನ್ನು ಯೋಚಿಸುತ್ತಲೇ ಇದೆ.

ಸರ್ಕಾರದ ವಾದ ಹೀಗೆ ಹರಿಯುತ್ತದೆ: "ಗಾಣಿಗ, ಕುಂಬಾರ, ಕ್ಷೌರಿಕ ಮುಂತಾದ ಹಿಂದುಳಿದ ಜಾತಿಯ ವ್ಯಕ್ತಿ ಎಷ್ಟೇ ಸೇವೆ ಸಲ್ಲಿಸಿದರೂ ಆತನ ಜಾತ್ಯತೀತ ದುಡಿಮೆ ಈ ಜಾತಿ ವ್ಯವಸ್ಥೆಯ ಸಮಾಜದಲ್ಲಿ ಗಣನೆಗೆ ಬರುವುದೇ ಇಲ್ಲ. ಬಂದರೂ ಆತ ಮಂಡಲ ಮಟ್ಟದ ಚುನಾವಣೆಗಳಲ್ಲಿ ಗೆಲ್ಲಲು ಸಾಧ್ಯವೇ ಆಗುವುದಿಲ್ಲ. ಹಿಂದುಳಿದ ಜಾತಿಯಲ್ಲಿ ಹುಟ್ಟಿದ ಕಾರಣಕ್ಕಾಗಿ ಆತನಿಗೆ ಅವಕಾಶವನ್ನು ಅಲ್ಲಗಳೆಯುವುದು ಸಾಮಾಜಿಕ ನ್ಯಾಯವಲ್ಲ. ಆದ್ದರಿಂದಾಗೇ ಮಂಡಲ ಪಂಚಾಯ್ತಿಗಳಿಗೆ ಹಿಂದುಳಿದವರ ನಾಮಕರಣ ಸಮರ್ಥನೀಯ ..." ಇತ್ಯಾದಿ.

ಹಿಂದುಳಿದ ಜಾತಿಗಳ ಬಗೆಗಿನ ಈ ಮಾತೇನೋ ನಿಜ. ಆದರೆ ಸರ್ಕಾರದ ಈ ಕ್ರಮ 'ನಿಜವಾದ ಖಾಯಿಲೆ, ತಪ್ಪು ಚಿಕಿತ್ಸೆ' ಎಂಬ ಗಾದೆಯಂತೆ ಕಾಣುತ್ತದೆ. ಏಕೆಂದರೆ ಈ ಅಂಶ ಈವರೆಗೆ ಯಾರಿಗೆ ಗೊತ್ತಿರಲಿಲ್ಲ? ಕಾಯಿದೆ ಜಾರಿಗಿಂತ ಅಥವಾ ಚುನಾವಣೆಗಿಂತ ಮೊದಲೇ ಇದಕ್ಕೆ ಸೂಕ್ತ ವ್ಯವಸ್ಥೆ ಮಾಡಬೇಕಿತ್ತು. ಹೇಗಿದ್ದರೂ ಕಾಯಿದೆಯಲ್ಲೂ ಅದಕ್ಕೆ ಅವಕಾಶವಿತ್ತಲ್ಲ.

ಅಷ್ಟಕ್ಕೂ ಈಗಾಗಲೇ ಶೇ. 92 ಭಾಗದಷ್ಟು ಜನಸಂಖ್ಯೆಯನ್ನು 'ಹಿಂದುಳಿದ' ಸಾಲಿಗೆ ಸೇರಿಸಿಯಾಗಿರುವಾಗ, ಇನ್ನುಳಿದುದರಲ್ಲಿ ಈ ಮೇಲ್ಕಂಡ ಜನಸಮುದಾಯಕ್ಕೆ ಎಷ್ಟು ಪ್ರಾತಿನಿಧ್ಯ ಕೊಡಬಹುದು, ಅಷ್ಟರಿಂದ 3 ಮಂದಿ ಸದಸ್ಯರನ್ನು ನೇಮಿಸಲು ಸಾಧ್ಯವೆ? ಎಂಬುದನ್ನೂ ಯೋಚಿಸಬೇಕು.

ಒಂದು ನಿಜವಾದ ಸಮಸ್ಯೆ ಈಗ ಹಲವು ಮಂಡಲಗಳಲ್ಲಿ ಎದುರಾಗಿದೆ. ನೂರಕ್ಕೂ ಹೆಚ್ಚು ಮಂಡಲಗಳಲ್ಲಿ, ಒಟ್ಟು ಸದಸ್ಯ ಬಲದಲ್ಲಿ ಕೇವಲ ಎರಡೇ ಪಕ್ಷಗಳು ಸಮ ಸಮ ಸ್ಥಾನಗಳನ್ನು ಪಡೆದುಕೊಂಡಿವೆ. ಅಂಥಲ್ಲಿ ಯಾವುದಾದರೂ ವಿಷಯ ಬಹುಮತದಿಂದ ನಿರ್ಧಾರವಾಗಬೇಕಾದಾಗ ಹೇಗೆ? ಎಂಬುದು ಸಮಸ್ಯೆ.

ಆದರೆ ಮಂಡಲಗಳಲ್ಲಾಗಲಿ, ಜಿಲ್ಲಾ ಪರಿಷತ್‌ಗಳಲ್ಲಾಗಲಿ ಬೆಸ ಸಂಖ್ಯೆಯ ಸ್ಥಾನಗಳಿರುವಂತೆ ಮೊದಲೇ ನೋಡಿಕೊಂಡಿದ್ದರೆ ಈ ಸಮಸ್ಯೆ ಬಹುಶಃ ಬರುತ್ತಿರಲಿಲ್ಲ. ಈಗಲಾದರೂ ಅಷ್ಟೆ ತಪ್ಪನ್ನು ಸರಿಪಡಿಸುವುದಕ್ಕೆ ಒಳದಾರಿ- ಅಡ್ಡದಾರಿಗಳಿಗಿಂತ, ಕ್ರಮಬದ್ಧವಾದ ದಾರಿ ಸ್ವಲ್ಪ ಬಳಸಾದರೂ ಸರಿ ಅದನ್ನೇ ಹಿಡಿಯುವುದು ಯುಕ್ತ.

ಒಂದು ವೇಳೆ ಮೇಲ್ಕಂಡ ಹಿಂದುಳಿದ ಜಾತಿಗಳಿಗೆ ಪ್ರಾತಿನಿಧ್ಯ ಕೊಡಲೇ ಬೇಕೆಂದಿದ್ದರೂ ಅದಕ್ಕೆ 'ನಾಮಕರಣ' ಸರಿಯಾದ ಮಾರ್ಗವಲ್ಲ. ಒಟ್ಟಾರೆ ಈ 'ನಾಮಕರಣದ ರಾಜಕೀಯ'ವೇ ಸಮರ್ಥನೀಯವಲ್ಲದ್ದು. ಹಿಂದೆ ಕಾಂಗ್ರೆಸ್ ಆಳ್ವಿಕೆಯಿದ್ದಾಗ, ಸರ್ಕಾರ ರಚಿಸುವ ಮಂಡಳಿಗಳಲ್ಲೆಲ್ಲಾ (ಭೂ ನ್ಯಾಯ ಮಂಡಳಿ ಇತ್ಯಾದಿ) ವಿರೋಧ ಪಕ್ಷಗಳಿಗೂ ಪ್ರಾತಿನಿಧ್ಯವಿರಬೇಕೆಂದು ಒತ್ತಾಯಿಸಿ ಅದನ್ನು ಜಾರಿಗೆ ತರಿಸಿದ್ದನ್ನು ಜನತಾಪಕ್ಷ ಕೂಡ ಜ್ಞಾಪಿಸಿಕೊಳ್ಳುವುದೊಳ್ಳೆಯದು.

## ಶೃಂಗೇರಿಯಲ್ಲೊಂದು ಸರಳ ವಿವಾಹ

(ನಮ್ಮ ಪ್ರತಿನಿಧಿಯಿಂದ)

ಶೃಂಗೇರಿ: ಇಲ್ಲಿನ ಜೆ.ಸಿ.ಬಿ.ಎಂ. ಕಾಲೇಜಿನಲ್ಲಿ ಕಾಮರ್ಸ್ ಉಪನ್ಯಾಸಕರಾಗಿರುವ ಧಾರವಾಡದ ಬಿ. ಐ. ಕೊಟ್ಟೂರ್ ಮತ್ತು ಅದೇ ಕಾಲೇಜಿನ ಬಿ.ಕಾಂ. ವಿದ್ಯಾರ್ಥಿನಿ ಬಿ. ಕೆ. ಸುಕನ್ಯ (ಹಾಲಂದೂರು ಕೃಷ್ಣಮೂರ್ತಿಯವರ ಮಗಳು) ಇವರಿಬ್ಬರೂ ಯಾವುದೇ ಅಶಾಸ್ತ್ರೀಯ (ತಾಳಿಯೂ ಸೇರಿದಂತೆ) ಸಂಪ್ರದಾಯಗಳಿಲ್ಲದೆ ಸರಳ ರೀತಿಯಲ್ಲಿ ಮದುವೆಯಾದರು. ಸಮಾರಂಭದಲ್ಲಿ ಊರಿನ ಗಣ್ಯರು, ಸಹೋದ್ಯೋಗಿಗಳು, ಐದು ನೂರಕ್ಕೂ ಹೆಚ್ಚು ಜನ ವಿದ್ಯಾರ್ಥಿಗಳು ಭಾಗವಹಿಸಿದ್ದರು. ವಧೂವರರು ವಿವಾಹ ಸಮರ್ಥನೆಯ ಪ್ರಮಾಣ ವಚನ ಓದಿ ಹಾರ ವಿನಿಮಯ ಮಾಡಿಕೊಂಡರು. ಹಯವದನ ಉಪಾಧ್ಯಾಯ ವಿವಾಹ ವಿಧಿ ನಿರ್ವಹಿಸಿದರು.

## ಸಿದ್ಧರಮಠ ರಥೋತ್ಸವ

ಕೊಪ್ಪ: ಇಲ್ಲಿಗೆ ಸಮೀಪದ ಸಿದ್ಧರಮಠದಲ್ಲಿ ಮಾ. 15ರಂದು ರಥೋತ್ಸವವೂ 13 ರಿಂದ 17ರವರೆಗೆ ಇತರ ಉತ್ಸವಗಳೂ ನಡೆಯುತ್ತವೆ. 15 ಮತ್ತು 16ರ ರಾತ್ರಿ ನಾಟಕ ಇತ್ಯಾದಿ ಮನರಂಜನಾ ಕಾರ್ಯಕ್ರಮಗಳು ನಡೆಯುತ್ತವೆ.

## ಶೃಂಗೇರಿ ಬಳಿ ಮತ್ತೊಂದು ಬಸ್ ಅಪಘಾತ

ಶೃಂಗೇರಿ: ಶಿವಮೊಗ್ಗದಿಂದ ಶೃಂಗೇರಿಗೆ ಬರುವ ಭಾಗ್ಯಶ್ರೀ ಮೋಟಾರ್ಸ್‌ನ ಬಸ್ಸೊಂದು ಮಾ. 4ರ ರಾತ್ರಿ 9 ಗಂಟೆಗೆ ಕುಂಚೆಬೈಲು ಸಮೀಪ ಮುಂಡುಗೋಡಿನ ಬಳಿ ಬ್ರೇಕ್ ವೈಫಲ್ಯದಿಂದ ಅಪಘಾತಕ್ಕೀಡಾಯಿತು. ಡ್ರೈವರ್‌ಗೆ ಕಾಲು ಮುರಿದಿದ್ದು ಅವರನ್ನೂ ಇನ್ನೊಬ್ಬ ಪ್ರಯಾಣಿಕರನ್ನೂ ಮಣಿಪಾಲಕ್ಕೆ ಕಳಿಸಲಾಗಿದೆ. ಸಾಧಾರಣದಿಂದ ಸ್ವಲ್ಪ ದೊಡ್ಡ ಪ್ರಮಾಣದ ಗಾಯಗಳಾದ 10 ಜನರಿಗೆ ಧನ್ವಂತರಿ ಆಸ್ಪತ್ರೆಯಲ್ಲಿ ಚಿಕಿತ್ಸೆ ನೀಡಲಾಗುತ್ತಿದೆ.

ಶಿವರಾತ್ರಿಯ ದಿನ ನಡೆದ 'ಮೈತ್ರಿ' ಬಸ್ಸಿನ ಭೀಕರ ಅಪಘಾತದ ದುಃಸ್ವಪ್ನದಿಂದ ಚೇತರಿಸಿಕೊಳ್ಳುವುದರೊಳಗೇ ಈ ಇನ್ನೊಂದು ಅಪಘಾತ ಸಂಭವಿಸಿರುವುದು ಪ್ರಯಾಣಿಕರನ್ನು ಕಂಗಾಲಾಗಿಸಿದೆ.

### ಅಡಿಕೆ ಧಾರಣೆ

**ಶಿವಮೊಗ್ಗ ತಾ|| 28.2.1987**

ಸರಕು : 2800 – 3679

ಚಿಟ್ಟೆ : 1810 – 2100

ಗೊರಬಲು : 701 –1121

**ಏಲಕ್ಕಿ ಧಾರಣೆ** (ಶಿವಮೊಗ್ಗ 21.2.87)

ಅತೀ ಉತ್ತಮ ರಾಶಿ ಕಾಯಿ ರೂ. 140 ರಿಂದ 151; ರಾಶಿ ಕಾಯಿ: 110ರಿಂದ 135; ಮಧ್ಯಮ ರಾಶಿ ಕಾಯಿ 90ರಿಂದ 127; ಕೊಳೆ ಕಾಯಿ 70ರಿಂದ 110 ಹಸಿರು ರಾಶಿ ಕಾಯಿ 110 ರಿಂದ 130.

ಮುಂದಿನ ವ್ಯಾಪಾರ 21-3-87ನೇ ಶನಿವಾರ.

**ಸಾಗರ ಅಡಿಕೆ ತಾ|| 4.3.87**

ಇಡಿ ಅಡಿಕೆ ರೂ. 1451–1678

ಆಪಿ ರೂ. 2951–3361

ಚಾಲಿ 276–1401

ಸಿಪ್ಪೆಗೋಟು ರೂ. 369–569

## ಬೇಸಿಗೆ ರಜೆಗೆ ಹೋಗಿ, ದೀಪಾವಳಿ ಮುಗಿಸಿ ಬಂದು...

ಭೈರೇದೇವರು: ಇಲ್ಲಿನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಈ ವರ್ಷದ ಆರಂಭದಿಂದಲೂ ಒಬ್ಬರೇ ಶಿಕ್ಷಕಿಯಿದ್ದು ನವರಾತ್ರಿ ರಜೆಯ ನಂತರ ಇನ್ನೊಬ್ಬರು ಬಂದು ಹೇಗೋ ಏಳೂ ತರಗತಿಗಳನ್ನು ನಿಭಾಯಿಸುತ್ತಿದ್ದರೆಂದೂ, ಹೋದ ಬೇಸಿಗೆ ರಜೆಗೆ ಊರಿಗೆ ಹೋದ ಗಣೇಶ ಎಂಬ ಅಧ್ಯಾಪಕ ಈಗ್ಗೆ 3 ತಿಂಗಳ ಹಿಂದೆ ಬಂದು ಏಳನೇ ತರಗತಿ ಪಾಠ ವಹಿಸಿಕೊಂಡು ನಿಗದಿತ ತರಗತಿ ಅಥವಾ ಸ್ಪೆಶಲ್ ಕ್ಲಾಸುಗಳಿಗೆ ಬಾರದೆ, ಪಬ್ಲಿಕ್ ಪರೀಕ್ಷೆ ಎದುರಿಸಬೇಕಿರುವ ಏಳನೇ ತರಗತಿಯ ಮಕ್ಕಳನ್ನು ಕಂಗೆಡಿಸಿದ್ದಾರೆಂದೂ ಪೋಷಕರು ದೂರಿದ್ದಾರೆ.

## ನಿಗದಿತ ಓವರ್ ಕ್ರಿಕೆಟ್ ಕಮ್ಮರಡಿಗೆ ಜಯ

ಶೃಂಗೇರಿ: ಇಲ್ಲಿನ ಜೇಸೀಸ್ ಏರ್ಪಡಿಸಿದ್ದ ಅಂತರ ಜಿಲ್ಲಾ ನಿಗದಿತ ಓವರುಗಳ ಕ್ರಿಕೆಟ್ ಟೂರ್ನಿಯಲ್ಲಿ 16 ತಂಡಗಳು ಭಾಗವಹಿಸಿದ್ದು ಕಮ್ಮರಡಿಯ ಗಜಾನನ ತಂಡ ಶೃಂಗೇರಿಯ ಶಾರದಾ ತಂಡದ ವಿರುದ್ಧ 30 ರನ್ ಜಯ ಗಳಿಸಿತು.

ಕೆ.ಎಸ್. ಶ್ರೀಕಂಠ (ಶೃಂ.)–ಉತ್ತಮ ಬ್ಯಾಟ್ಸ್‌ಮನ್, ಪಾರ್ಥಸಾರಥಿ (ಶೃಂ.)–ಉತ್ತಮ ಬೌಲರ್, ನಾಗೇಶ (ಕಮ್ಮರಡಿ) -ಉತ್ತಮ ಆಲ್‌ರೌಂಡರ್, ಕೆ.ಬಿ. ಲಕ್ಷ್ಮೀನಾರಾಯಣ (ಶೃಂ.)– ಕೂಟದ 'ಪುರುಷೋತ್ತಮ'–ಹೀಗೆ ವೈಯಕ್ತಿಕ ಬಹುಮಾನ ಗಳಿಸಿದರು.

ಜೇಸಿ ಅಧ್ಯಕ್ಷ ಯು. ಎಸ್. ವಿಠಲ್ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ರಾಜ್ಯ ಉಪಾಧ್ಯಕ್ಷ ಸೋಮಶೇಖರ್ ಬಹುಮಾನ ವಿತರಿಸಿದರು. ಎ. ಆರ್. ಮಂಜುನಾಥ್ ಮುಖ್ಯ ಅತಿಥಿ. ಹಿರಿಯ ಆಟಗಾರರಾದ ಮಾ. ಭಿಡೆ, ಡಾ|| ರಾಜೀವ ಶೆಟ್ಟಿ, ಕೋದಂಡರಾಮ ಭಟ್ಟ, ಛಾಯಾಪತಿ, ಜೆ. ಎಸ್. ಶಾನುಭೋಗ್ ಸನ್ಮಾನಿಸಲ್ಪಟ್ಟರು.

## ಓದುಗರ ಪತ್ರ

### "ಎಕ್ಸ್‌ಪ್ರೆಸ್ ಬಸ್‌ಗಳಿಗೆ ನ.ರಾ.ಪುರ ಪೋಲೀಸರ ಕಿರುಕುಳ"

ನಮಸ್ಕಾರ,

ಈಚೆಗೆ, ಶಿವಮೊಗ್ಗ-ಶೃಂಗೇರಿ ನಡುವೆ ಓಡಾಡುವ ಎಕ್ಸ್‌ಪ್ರೆಸ್ ಬಸ್ಸುಗಳನ್ನು ನ.ರಾ. ಪುರದ ಪೋಲೀಸ್ ಅಧಿಕಾರಿಗಳು ತಡೆದು 'ಕೊರಳ ಕೊಪ್ಪದಲ್ಲಿ ನಮ್ಮವರು ನಿಲ್ಲಿಸಲು ಹೇಳಿದರೆ ಯಾಕೆ ನಿಲ್ಲಿಸಲಿಲ್ಲ?', 'ಕರಗುಂದದಲ್ಲಿ ಯಾಕೆ ನಿಲ್ಲಿಸಲಿಲ್ಲ?' ಮುಂತಾಗಿ ದಬಾಯಿಸಿ, ಬಸ್‌ನವರು "ಇದು ಎಕ್ಸ್‌ಪ್ರೆಸ್ಸು ಸಾರ್. ಅಲ್ಲೆಲ್ಲ ನಿಲ್ಲಿಸಲು ಸ್ಟಾಪ್ ಇಲ್ಲ, ಟೈಮೂ ಇಲ್ಲ" ಎಂದು ಕೇಳಿಕೊಂಡಾಗ, "ಹಾಗಾದರೆ ಅರ್ಧ ಗಂಟೆ ಬಸ್ ನಿಲ್ಲಿಸಿದರೆ ಆಗ ಗೊತ್ತಾಗುತ್ತೆ" ಎಂದು ಒಂದು ಕೇಸು ಹಾಕಿ ಅರ್ಧರ್ಧ ಗಂಟೆ ನಿಲ್ಲಿಸಿ ಬಿಡುವುದನ್ನು ನಾವು ಅನುಭವಿಸಿದ್ದೇವೆ. ಭಾಗ್ಯಶ್ರೀ ಬಸ್ ಒಂದರಲ್ಲೇ ನಮಗೆ ಇಂಥ ಅನುಭವ 23.1.87 ಹಾಗೂ 6.2.87 ಹೀಗೆ 2 ಸಲ ಆಗಿದೆ! (ಕೊರಳ ಕೊಪ್ಪದಲ್ಲಿ ನಿಲ್ಲಿಸಲಿಲ್ಲ ಎಂಬ ಕಾರಣಕ್ಕೆ ಬಿ.ಎಚ್. ಕೈಮರದಲ್ಲಿ ಕೇಸು ಹಾಕಿ ನಿಲ್ಲಿಸಿದ್ದು ಹಾಗೂ ಕರಗುಂದದಲ್ಲಿ ನಿಲ್ಲಸದಿದ್ದುದಕ್ಕೆ ನ.ರಾ. ಪುರದಲ್ಲಿ ನಿಲ್ಲಿಸಿದ್ದು.)

ಭಾಗ್ಯಶ್ರೀ ಬಸ್ಸಿಗೆ ರನ್ನಿಂಗ್ ಅವಧಿ ಬಹಳ ಇಕ್ಕಟ್ಟಾಗಿದ್ದು ಎಲ್ಲೂ ಸಮಯ ಹಾಳು ಮಾಡದೆ ಪ್ರಯಾಣಿಕರನ್ನು ಸಮಯಕ್ಕೆ ಸರಿಯಾಗಿ ತಲುಪಿಸುತ್ತಿದ್ದಾರೆ. ಹೀಗೆ ಪ್ರಯಾಣಿಕರ ಅನುಕೂಲಕ್ಕಾಗಿಯೇ ಅಲ್ಲವೆ ಎಕ್ಸ್‌ಪ್ರೆಸ್ ಪರವಾನಗಿ ಕೊಡುವುದು? ಆದರೆ ಈ ಪೋಲೀಸಿನವರು ಹೀಗೆ ತಮಗೆ ಬೇಕೆಂದಲ್ಲಿ ನಿಲ್ಲಿಸಲು ಹೇಳಿ, ನಿಲ್ಲಿಸದಿದ್ದಾಗ ಕೇಸು ಹಾಕಿ ಪ್ರಯಾಣಿಕರಿಗೆ ವಿನಾ ಕಾರಣ ತೊಂದರೆ ಕೊಡುವುದಾಗಲಿ ನ್ಯಾಯವೆ? ಇವರು ಬೇರೆ ಎಕ್ಸ್‌ಪ್ರೆಸ್ ಬಸ್ಸುಗಳಿಗೂ ಹೀಗೆ ಮಾಡ್ತಾರೊ ಏನೋ! ಈ ವಿಚಾರದಲ್ಲಿ ಸಂಬಂಧಪಟ್ಟ ಮೇಲಧಿಕಾರಿಗಳು ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ನಾವು ವಿನಂತಿಸುತ್ತೇವೆ.

—ನೊಂದ ಪ್ರಯಾಣಿಕರು,
(7 ಜನರ ಸಹಿಗಳಿವೆ)

### 'ಮ್ಯಾಮ್ಕೋಸ್'ನಲ್ಲಿ ಪ್ರತಿ ಶನಿವಾರ ಚಾಲಿ, ಆಪಿ, ಕೆಂಪು ಇಡಿ ಅಡಿಕೆ ವಹಿವಾಟು ವ್ಯವಸ್ಥೆ

ಶಿವಮೊಗ್ಗ: ಇಲ್ಲಿನ ಮಾಮ್‌ಕೋಸ್‌ನಲ್ಲಿ ಫೆ. 23ರಂದು ಆರಂಭಿಸಿರುವ ಚಾಲಿ, ಆಪಿ, ಚಿಕಣಿ, ಕೆಂಪು ಇಡಿ ಅಡಿಕೆಗಳ ಹರಾಜನ್ನು ಇನ್ನು ಮುಂದೆಯೂ ಪ್ರತಿ ಶನಿವಾರಗಳಂದು ಮುಂದುವರಿಸಿಕೊಂಡು ಹೋಗಲು ಸಂಘದ ಆಡಳಿತ ಮಂಡಳಿ ನಿರ್ಧರಿಸಿದೆ. ಆದರೆ ತಿಂಗಳ ಎರಡನೇ ಶನಿವಾರ ಮಾತ್ರ ಈ ವ್ಯಾಪಾರ ಇರುವುದಿಲ್ಲ.

ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳ ಅಡಿಕೆ ಬೆಳೆಗಾರರು ಈ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಲು ಕೋರಲಾಗಿದೆ.

### ರಂಜಿಸಿದ ನಾಟಕಗಳು

ಹೇರೂರು: ಇಲ್ಲಿಗೆ ಸಮೀಪದ ವೀರಗಲ್ಲು ಮಕ್ಕಿ ಶಾಲೆಯ ವಾರ್ಷಿಕೋತ್ಸವ ಎಚ್.ಎಸ್. ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಈಚೆಗೆ ನಡೆಯಿತು. ಡಾ|| ಟಿ.ಎಸ್. ಜೆ. ರಾವ್, ಎ.ಆರ್. ಗೋಪಾಲ ಗೌಡ, ಬಿ. ಜೆ. ಶ್ರೀನಿವಾಸ ಹೆಬ್ಬಾರ್ ಮತ್ತು ಎಂ.ಕೆ. ಪ್ರಭಾವತಿ ಮುಖ್ಯ ಅತಿಥಿಗಳಾಗಿದ್ದರು.

ಶಾಲಾ ಮಕ್ಕಳು ಅಭಿನಯಿಸಿದ ಎರಡು ನಾಟಕಗಳು ಹಾಗೂ ಹಳೇ ವಿದ್ಯಾರ್ಥಿ ಸಂಘದವರು ಅಭಿನಯಿಸಿದ 'ಮೋಹಿನಿ ಭಸ್ಮಾಸುರ' ರೂಪಕ, ಸತ್ಸವ್ಮ ದೆಯ್ಯಾರ್' ತುಳು ಹಾಗೂ 'ನಾ ಮೆಚ್ಚಿದ ಹುಡುಗಿ' ಕನ್ನಡ ನಾಟಕಗಳು ಕಿಕ್ಕಿರಿದು ನೆರೆದಿದ್ದ ಗ್ರಾಮೀಣ ಜನತೆಯನ್ನು ರಂಜಿಸಿದವು.

### ಹರಿಹರಪುರದಲ್ಲಿ ನೂತನ ಯುವಜನ ಸಂಘ

ಹರಿಹರಪುರ: ಇಲ್ಲಿ 'ಅಖಿಲ ಕರ್ನಾಟಕ ಯುವಜನ ಸಂಘ'ದ ಉದ್ಘಾಟನೆ ಫೆ. 26ರಂದು ನಡೆಯಿತು. ಚರ್ಚೆ, ಪ್ರಬಂಧ, ಜನಪದ ಗೀತೆ, 100 ಮೀ., 800 ಮೀ. ಓಟದ ಸ್ಪರ್ಧೆಗಳು ನಡೆದವು. ಡಾ|| ರಾಜಣ್ಣ, ಕರುಣಚಂದ್ರ, ಕು|| ಜ್ಞಾನಪೂರ್ಣ ಭಾಗವಹಿಸಿದ್ದರು. ಪ್ರೈ.ಶಿ. ಶಿಕ್ಷಕ ಎ. ಎಂ. ಶಿವಮೂರ್ತಿ ಅವರನ್ನು ಕೆ.ಜಿ.ಎ. ಶಾಸ್ತ್ರಿಯವರ ಹಸ್ತ ಸನ್ಮಾನಿಸಲಾಯಿತು.





## ಕರ್ನಾಟಕ ಬ್ಯಾಂಕ್ ಲಿಮಿಟೆಡ್

ರಿಜಿಸ್ಟರ್ಡ್ ಆಫೀಸು
ಮಂಗಳೂರು – 575003
ಶಾಖೆ : ಕೊಪ್ಪ

ತಾ|| 2-3-1987

### ಏಲಂ ನೋಟೀಸು

ಈ ಕೆಳಗಿನ ಮಹನೀಯರು ನಮ್ಮ ಶಾಖೆಯಿಂದ ಚಿನ್ನಾಭರಣ ನಗಗಳ ಈಡಿನ ಮೇಲೆ ಪಡೆದ ಸಾಲವನ್ನು ವಾಯಿದೆಗೆ ಸರಿಯಾಗಿ ಮರುಪಾವತಿ ಮಾಡದೆ ಇದ್ದುದರಿಂದ ಸದ್ರಿಯವರಿಗೆ ರಿಜಿಸ್ಟ್ರಿ ನೋಟೀಸು ಮೂಲಕ ಕೇಳಿಕೊಂಡಿದ್ದಂತೆ ಕೆಲವರಿಗೆ ಕಳುಹಿಸಿದ ರಿಜಿಸ್ಟ್ರಿ ನೋಟೀಸುಗಳು ಕಾರಣಾಂತರಗಳಿಂದ ಸವ-ಗೇನೆ ವಾಪಾಸು ಬಂದಿರುವುದರಿಂದಲೂ ಸದ್ರಿಯವರಿಗೆ ವ ಅವರ ವಾರಸುದಾರರಿಗೆ ಈ ಮೂಲಕ ತಿಳಿಸುವುದೇನೆಂದರೆ ಸಾಲದ ಬಾಬ್ತು ಬ್ಯಾಂಕಿಗೆ ಸಲ್ಲತಕ್ಕ ಮೊಬಲಗನ್ನು ಇದೇ ತಿಂಗಳ 21ನೇ ತಾರೀಖಿನ ಒಳಗೆ ಬ್ಯಾಂಕಿಗೆ ಮರು ಪಾವತಿ ಮಾಡಲು ತಪ್ಪಿದಲ್ಲಿ ಸದ್ರಿಯವರು ನಮ್ಮಲ್ಲಿ ಅಡವಿಟ್ಟ ನಗಗಳನ್ನು ತಾ|| 26.3.1987 ಅಪರಾಹ್ನ ಗಂಟೆ 3ಕ್ಕೆ ಸರಿಯಾಗಿ ಬ್ಯಾಂಕಿನ ವಠಾರದಲ್ಲಿ ಬಹಿರಂಗ ಹರಾಜು ಮಾಡಲಾದೀತು ಯಾ ಬ್ಯಾಂಕಿನ ಯುಕ್ತ ಕಂಡ ಇತರ ದಿನಗಳಲ್ಲಿ ಪುನಃ ನೋಟೀಸು ಕೊಡದೇನೆ ಬಹಿರಂಗ ಯಾ ಖಾಸಗಿಯಾಗಿ ಹರಾಜು ಮಾಡಲಾದೀತು. ಈ ಸಂಬಂಧ ಬ್ಯಾಂಕಿಗೆ ಉಂಟಾಗಬಹುದಾದ ಸಕಲ ಖರ್ಚು ವ ನಷ್ಟವನ್ನು ತೆರಲು ಸದರಿ ಸಾಲಗಾರರು ಜವಾಬುದಾರರಾಗಿರುತ್ತಾರೆ, ತಿಳಿದಿರಲಿ.

| ಸಾಲದ ನಂಬ್ರ | ಸಾಲಗಾರನ ಹೆಸರು ವಿಳಾಸ | ಮೊಬಲಗು |
|---|---|---|
| 1) 9/83<br>21.2.83 | ಎಂ. ಹುಸೇನ್<br>s/o ಮೈದಿನ್ ಕುಟ್ಟಿ<br>ಪಿ.ಡಬ್ಲ್ಯು.ಡಿ. ಕಂಟ್ರಾಕ್ಟರ್,<br>ಕೊಪ್ಪ | 7429-00 |
| 2) 98/84 | ವಿಧುರ ಪ್ರಸಾದ್<br>s/o ಪಿ. ರಾಮಚಂದ್ರರಾವ್<br>ಹೆಲ್ತ್ ಕ್ವಾರ್ಟರ್ಸ್<br>ಕೊಪ್ಪ | 3398-00 |

ಪಿ. ನಾಗರಾಜ ಚಡಗ,
ಬ್ರಾಂಚ್ ಮ್ಯಾನೇಜರ್

## ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ಕೊಪ್ಪ, ಚಿಕ್ಕಮಗಳೂರು ಜಿಲ್ಲೆ

ಮೇಲ್ಕಂಡ ಸಹಕಾರ ಸಂಘವು ಶೃಂಗೇರಿ ವಲಯದ ಕಿರು ಅರಣ್ಯ ಉತ್ಪನ್ನಗಳ (ಎಂ.ಎಫ್.ಪಿ.) ಗುತ್ತಿಗೆಯನ್ನು 30.6.86ರಿಂದ 30.6.88ರವರೆಗೆ ಪಡೆದುಕೊಂಡಿದೆ. (ಗುತ್ತಿಗೆ ಆದೇಶ ಸಂಖ್ಯೆ: ಬಿ 2. ಎಂ.ಎಫ್.ಪಿ /ಎ ಆರ್. 54 86-87ರ ಪ್ರಕಾರ)

ಈ ವಲಯದಲ್ಲಿ ದೊರೆಯುವ ಅರಣ್ಯ ಉತ್ಪನ್ನಗಳಾದ ಸೀಗೇಕಾಯಿ, ಜೇನುತುಪ್ಪ, ಮುರುಗನ ಹುಳಿ, ಅಂಟುವಾಳ, ಜೇನುಮೇಣ ಮುಂತಾದ ಎಲ್ಲಾ ಎಂ.ಎಫ್.ಪಿ. ವಸ್ತುಗಳನ್ನು ಯಾರೇ ಆಗಲಿ, ಸಂಘದ ವತಿಯಿಂದ ತೆರೆದಿರುವ ಎಂ.ಎಫ್.ಪಿ. ಶೇಕರಣಾ ಕೇಂದ್ರಗಳಿಗೆ ಒಪ್ಪಿಸಿ, ಪೇಟಿಧಾರಣೆಯನ್ನು ಪಡೆಯತಕ್ಕದ್ದು. ಈ ವಲಯದಲ್ಲಿ ಸಂಗ್ರಹಿಸಿದ ವಸ್ತುಗಳನ್ನು ಸಂಘಕ್ಕೆ ಕೊಡದೆ ಬೇರೆ ಯಾರಿಗಾದರೂ ಕೊಟ್ಟದ್ದು ಕಂಡು ಬಂದರೆ ಕೊಟ್ಟವರ ಮೇಲೂ, ಪಡೆದವರ ಮೇಲೂ ಕಾನೂನು ರೀತಿಯ ಕ್ರಮ ತೆಗೆದುಕೊಳ್ಳಲಾಗುವುದು. ಅನಧಿಕೃತವಾಗಿ ದಾಸ್ತಾನು ಮಾಡಿರುವುದು ಕಂಡುಬಂದರೆ ಅದನ್ನು ಮುಟ್ಟುಗೋಲು ಹಾಕುವ ಅಧಿಕಾರವನ್ನೂ ಸಂಘವು ಹೊಂದಿರುತ್ತದೆ.

ಸಂಘದ ವತಿಯಿಂದ ನೇಮಿಸಲ್ಪಟ್ಟ ಮೇಲ್ವಿಚಾರಕರು ಈ ಕುರಿತು ತಪಾಸಣೆಗಳನ್ನು ನಡೆಸುತ್ತಾರೆ. ವಾಹನಗಳನ್ನೂ ಸಹ ತಪಾಸಣೆ ಮಾಡುವ ಅಧಿಕಾರವನ್ನು ಅವರು ಹೊಂದಿರುತ್ತಾರೆ. ಅಲ್ಲದೆ, ಕೆರೆಕಟ್ಟೆ ಮತ್ತು ಬೇಗಾರು ಗೇಟುಗಳಲ್ಲಿ ಸಂಘದ ಸಿಬ್ಬಂದಿಯವರು ತಪಾಸಣೆ ಮಾಡುತ್ತಾರೆ.

ಆದುದರಿಂದ ಸಾರ್ವಜನಿಕರು ಸಂಗ್ರಹಿಸಿದ, ಶೃಂಗೇರಿ ವಲಯದ ಅರಣ್ಯ ಉತ್ಪನ್ನಗಳನ್ನು ಸಂಘದಿಂದ ತೆರೆದ ಈ ಕೆಳಕಂಡ ಕೇಂದ್ರಗಳಿಗೇ ಒಪ್ಪಿಸತಕ್ಕದ್ದು. ಕೇಂದ್ರಗಳು: 1) ಮೇಗೂರು, ಸಂಘದ ಶಾಖೆ; 2) ನೆಮ್ಮಾರ್-ಕೆರೆಕಟ್ಟೆ; 3) ಕಿಗ್ಗಾ; 4) ಅಡ್ಡಗದ್ದೆ; 5) ಬಿಲಗದ್ದೆ; 6) ಬಿದರಗೋಡು; 7) ಉತ್ತಮೇಶ್ವರ; 8) ಅಗಳಗಂಡಿ.

ಈ ಕೆಳಕಂಡವರು ಮೇಲ್ವಿಚಾರಕರುಗಳಾಗಿದ್ದಾರೆ.

ಪಿ. ಶೇಷಯ್ಯ (ಸಂಘದ ಅಧ್ಯಕ್ಷರು); ಕೆ.ಎಸ್. ಮಹೇಶ್, ಡಿ ಟಿ ಪಾಂಡುನಾಯ್ಕ, ಕೆ. ಎಸ್. ಶ್ರೀನಿವಾಸ, ಸೀನನಾಯ್ಕ, ಸಿಂಗೇ ಗೌಡ (ನಿರ್ದೇಶಕರುಗಳು). (ಈ ಮೇಲ್ವಿಚಾರಕರುಗಳು ಶೃಂಗೇರಿ ವಲಯದ ಯಾವುದೇ ಸ್ಥಳದಲ್ಲಿ ಎಂ. ಎಫ್. ಪಿ. ವಸ್ತುಗಳ ತಪಾಸಣೆ ಮತ್ತು ವಹಿವಾಟು ನೋಡಿಕೊಳ್ಳಲು ಅಧಿಕಾರ ಪಡೆದಿರುತ್ತಾರೆ.)

ಕಾರ್ಯಕಾರಿ ನಿರ್ದೇಶಕರು, ಲ್ಯಾಂಪ್ ಸೊಸೈಟಿ, ಕೊಪ್ಪ

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.